# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2161

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 30.03.2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ಉನ್ನತ ಶಿಕ್ಷಣ, ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

| ಪ್ರಶ್ನೆ | ಉತ್ತರ |
|---|---|
| ಅ) ವಿಶ್ವದಲ್ಲಿ ಸಿಲಿಕಾನ್ ಸಿಟಿ ಎಂದು ಹೆಸರು ವಾಸಿಯಾಗಿರುವ ಬೆಂಗಳೂರಿನಲ್ಲಿಯೇ ಎಲ್ಲಾ ಐಟಿ, ಬಿಟಿ ಉದ್ಯಮಗಳು ಸ್ಥಾಪನೆಯಾಗಿದ್ದು, ಒಂದೇ ಕಡೆ ಕೇಂದ್ರೀಕೃತವಾದ ಈ ಉದ್ಯಮಗಳಿಂದ ಬೆಂಗಳೂರು ನಗರದಲ್ಲಿ ಅನೇಕ ಸಮಸ್ಯೆಗಳು ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಶ್ವದಲ್ಲಿ ಸಿಲಿಕಾನ್ ಸಿಟಿ ಎಂದು ಹೆಸರು ವಾಸಿಯಾಗಿರುವ ಬೆಂಗಳೂರಿನಲ್ಲಿಯೇ ಎಲ್ಲಾ ಐಟಿ, ಬಿಟಿ ಉದ್ಯಮಗಳು ಸ್ಥಾಪನೆಯಾಗುವ ಬದಲು ರಾಜ್ಯದ ದ್ವಿತೀಯ ಹಾಗೂ ತೃತೀಯ ಹಂತದ ನಗರಗಳಲ್ಲಿ ಉದ್ಯಮಗಳನ್ನು ಸ್ಥಾಪಿಸುವ ಉದ್ದಿಮೆದಾರರಿಗೆ ಉತ್ತೇಜನ ನೀಡಲು ಐಟಿ ಹಾಗೂ ಬಿಟಿ ನೀತಿಗಳಲ್ಲಿ ರಿಯಾಯಿತಿ / ವಿನಾಯಿತಿಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿದೆ. |
| ಆ) ಬೆಂಗಳೂರಿನಲ್ಲಿ ಇರುವ ಈ ಒತ್ತಡವನ್ನು ತಡೆಯಲು ಕರ್ನಾಟಕದ ಇತರ ಪಟ್ಟಣಗಳಾದ ಬೆಳಗಾವಿ, ಹುಬ್ಬಳ್ಳಿ, ಧಾರವಾಡ, ಮಂಗಳೂರು, ಕಲಬುರಗಿ ಹಾಗೂ ಮೈಸೂರಿನಂತಹ ಪಟ್ಟಣಗಳಿಗೆ ಸದರಿ ಉದ್ಯೋಗದ ವ್ಯಾಪ್ತಿಯನ್ನು ಸ್ಥಳಾಂತರಿಸಲು ಸರ್ಕಾರ ಯೋಚಿಸಿದೆಯೇ; | ಬೆಂಗಳೂರಿನಲ್ಲಿ ಇರುವಂತೆಯೇ ಉದ್ಯೋಗದ ವ್ಯಾಪ್ತಿಯನ್ನು ಕರ್ನಾಟಕದ ಇತರೆ ಪಟ್ಟಣಗಳಾದ ಬೆಳಗಾವಿ, ಹುಬ್ಬಳ್ಳಿ, ಧಾರವಾಡ, ಮಂಗಳೂರು, ಕಲಬುರಗಿ ಹಾಗೂ ಮೈಸೂರಿನಂತಹ ಪಟ್ಟಣಗಳಿಗೆ ವಿಸ್ತರಿಸಲು ಸರ್ಕಾರವು ಈಗಾಗಲೇ ಈ ಕೆಳಕಂಡ ಯೋಜನೆಗಳನ್ನು ರೂಪಿಸಿದೆ:-<br><br>1) **ಬೆಳಗಾವಿ** - ಬೆಳಗಾವಿ ಜಿಲ್ಲೆಯಲ್ಲಿ ಐಕೆಪಿ ವತಿಯಿಂದ ಕೆ-ಟೆಕ್ ಇನ್ನೋವೇಷನ್ ಹಬ್ ಹಾಗೂ ಸರ್ವಬಳಕೆಯ ಸಲಕರಣೆಗಳ ಸೌಲಭ್ಯ {Common Instrumentation Facility (CIF)} ವನ್ನು ಸರ್ಕಾರದ ವತಿಯಿಂದ ಸ್ಥಾಪಿಸಲಾಗಿದೆ ಹಾಗೂ ಬೆಳಗಾವಿಯ ಕೆಎಲ್ಎಸ್ ಮತ್ತು ಕೆಎಲ್ಇ ಕಾಲೇಜುಗಳಲ್ಲಿ ನ್ಯೂ ಏಜ್ ಇನ್ನೋವೇಷನ್ ನೆಟ್‌ವರ್ಕ್ (NAIN) ಗಳನ್ನು ಸ್ಥಾಪಿಸಲಾಗಿರುತ್ತದೆ.<br><br>2) **ಹುಬ್ಬಳ್ಳಿ-ಧಾರವಾಡ** - ಹುಬ್ಬಳ್ಳಿಯಲ್ಲಿ ಸರ್ಕಾರದ ವತಿಯಿಂದ ಐಟಿ ಪಾರ್ಕ್ ನ್ನು ಸ್ಥಾಪಿಸಿದ್ದು, ಸದರಿ ಪಾರ್ಕ್‌ನಲ್ಲಿ ಪ್ರಸ್ತುತ ಸುಮಾರು 56 ಕಂಪನಿಗಳು ಕಾರ್ಯನಿರ್ವಹಿಸುತ್ತಿವೆ. ಧಾರವಾಡದ ಎಸ್‌ಡಿಎಮ್ ಕಾಲೇಜಿನಲ್ಲಿ NAIN ಕೇಂದ್ರವನ್ನು ಸ್ಥಾಪಿಸಲಾಗಿರುತ್ತದೆ.<br><br>3) **ಮಂಗಳೂರು** - ಮಂಗಳೂರಿನಲ್ಲಿ ತಂತ್ರಜ್ಞಾನ ಕಂಪನಿಗಳ ಉಪಯೋಗಕ್ಕಾಗಿ ಐಕೆಪಿ ವತಿಯಿಂದ ಕೆ-ಟೆಕ್ ಇನ್ನೋವೇಷನ್ ಹಬ್ ಹಾಗೂ ಸರ್ವಬಳಕೆಯ ಸಲಕರಣೆಗಳ (CIF) ಸೌಲಭ್ಯವನ್ನು ಸರ್ಕಾರದ ವತಿಯಿಂದ ಸ್ಥಾಪಿಸಲಾಗಿದೆ ಹಾಗೂ ಈ ಜಿಲ್ಲೆಯ ವಿದ್ಯಾರ್ಥಿಗಳಿಗೆ ತಮ್ಮ ನಾವೀನ್ಯತೆ ಹಾಗೂ ಆವಿಷ್ಕಾರಗಳನ್ನು ಅಭಿವೃದ್ಧಿಪಡಿಸಲು ದಕ್ಷಿಣ ಕನ್ನಡ ಜಿಲ್ಲೆಯ ಆರು ಕಾಲೇಜುಗಳಲ್ಲಿ ಸರ್ಕಾರದ ಅನುದಾನದೊಂದಿಗೆ NAIN ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ. |

| | |
|---|---|
| | **4) ಕಲಬುರ್ಗಿ** - ಕಿಯೋನಿಕ್ಸ್ ಸಂಸ್ಥೆಯ ಮುಖಾಂತರ ಕಲಬುರ್ಗಿಯಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್ ನ್ನು ಸ್ಥಾಪಿಸಲಾಗಿರುತ್ತದೆ. ಕಲಬುರ್ಗಿಯ ಪಿಡಿಎ ಕಾಲೇಜಿನಲ್ಲಿ NAIN ಕೇಂದ್ರವನ್ನು ಸ್ಥಾಪಿಸಲಾಗಿರುತ್ತದೆ.<br><br>**5) ಮೈಸೂರು** - ಮೈಸೂರಿನ ಹೆಬ್ಬಾಳದ ಹೂಟಗಳ್ಳಿಯಲ್ಲಿ ಎಲೆಕ್ಟ್ರಾನಿಕ್ಸ್ ಉದ್ಯಮಕ್ಕೆ ಅನುಕೂಲವಾಗುವಂತೆ ಬ್ರೌನ್‌ಫೀಲ್ಡ್ ಇಎಸ್‌ಡಿಎಮ್ ಕ್ಲಸ್ಟರ್ ಅನ್ನು ಸ್ಥಾಪಿಸಲಾಗಿದೆ ಹಾಗೂ ಮೈಸೂರು ಜಿಲ್ಲೆಯ ನಾಲ್ಕು ಕಾಲೇಜುಗಳಲ್ಲಿ NAIN ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ. |
| ಇ) ಇತರೆ ನಗರಗಳಲ್ಲಿ ಉದ್ಯಮಗಳ ಸ್ಥಾಪನೆಯಿಂದ ಬೆಂಗಳೂರಿನ ಸಂಚಾರ ವ್ಯವಸ್ಥೆ ನಿಯಂತ್ರಣ ಸಮರ್ಪಕ ನೀರಿನ ವ್ಯವಸ್ಥೆಗಳನ್ನು ನಿಯಂತ್ರಣದಲ್ಲಿಡಬಹುದಾಗಿದ್ದು, ಆ ಮೇಲ್ಕಂಡ ಸ್ಥಳಗಳಲ್ಲಿನ ಹಾಗೂ ಅಲ್ಲಿನ ಸುತ್ತಮುತ್ತ ವಾಸಿಸುವ ನಾಗರೀಕರಿಗೆ ಮತ್ತು ಉದ್ಯೋಗಾಕಾಂಕ್ಷಿಗಳಿಗೆ ಅನುಕೂಲವಾಗುವ ಬಗ್ಗೆ ಸರ್ಕಾರ ಯೋಚಿಸಿದೆಯೇ; | ರಾಜ್ಯದ ನಾಗರೀಕರಿಗೆ ಮತ್ತು ಉದ್ಯೋಗಾಕಾಂಕ್ಷಿಗಳಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಸರ್ಕಾರವು ಈ ಕೆಳಕಂಡ ಕ್ರಮಗಳನ್ನುಕೈಗೊಂಡಿದೆ:-<br><br>1) ರಾಜ್ಯದ ದ್ವಿತೀಯ ಹಾಗೂ ತೃತೀಯ ಹಂತದ ನಗರಗಳಲ್ಲಿ ಪ್ರಾರಂಭಿಸುವ ಮಾಹಿತಿ ತಂತ್ರಜ್ಞಾನ ಉದ್ಯಮಗಳಿಗೆ ಸರ್ಕಾರವು ಘೋಷಿಸಿರುವ ನೀತಿಗಳನ್ವಯ ರಿಯಾಯಿತಿ/ವಿನಾಯಿತಿಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿದೆ.<br><br>2) ಬೆಂಗಳೂರು ಹೊರತುಪಡಿಸಿ ರಾಜ್ಯದ ಬೇರೆ ಬೇರೆ ಜಿಲ್ಲೆಗಳ ನಿರುದ್ಯೋಗಿಗಳಿಗೆ ಉದ್ಯೋಗಾವಕಾಶಕ್ಕೆ ಅನುಕೂಲವಾಗುವ ನಿಟ್ಟಿನಲ್ಲಿ ಈಗಾಗಲೇ ರಾಜ್ಯದ ಹುಬ್ಬಳ್ಳಿ, ಶಿವಮೊಗ್ಗ ಹಾಗೂ ಕಲಬುರ್ಗಿಗಳಲ್ಲಿ ಸರ್ಕಾರದ ವತಿಯಿಂದ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳನ್ನು ಸ್ಥಾಪಿಸಲಾಗಿರುತ್ತದೆ.<br><br>3) ವಿದ್ಯಾರ್ಥಿಗಳನ್ನು ಉದ್ದಿಮೆದಾರರನ್ನಾಗಿ ಮಾಡುವ ದಿಸೆಯಲ್ಲಿ ವಿಜಯಪುರ, ಬಾಗಲಕೋಟೆ, ಕಲಬುರ್ಗಿ, ಬೆಳಗಾವಿ, ಧಾರವಾಡ, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಹಾಸನ, ಚಿಕ್ಕಬಳ್ಳಾಪುರ, ದಾವಣಗೆರೆ, ಮೈಸೂರು ಹಾಗೂ ತುಮಕೂರು ಜಿಲ್ಲೆಗಳ ಆಯ್ದ ಸುಮಾರು 30 ಕಾಲೇಜುಗಳಲ್ಲಿ NAIN ಕೇಂದ್ರಗಳನ್ನು ತೆರೆಯಲಾಗಿರುತ್ತದೆ.<br><br>4) ಬೆಂಗಳೂರಿಗೆ ಹತ್ತಿರವಿರುವ ಮೈಸೂರಿನ ಹೆಬ್ಬಾಳದ ಹೂಟಗಳ್ಳಿಯಲ್ಲಿ ಎಲೆಕ್ಟ್ರಾನಿಕ್ಸ್ ಉದ್ಯಮಕ್ಕೆ ಅನುಕೂಲವಾಗುವಂತೆ ಬ್ರೌನ್ ಫೀಲ್ಡ್ ಇಎಸ್‌ಡಿಎಮ್ ಕ್ಲಸ್ಟರ್ ಅನ್ನು ಸ್ಥಾಪಿಸಲಾಗಿದೆ. |
| ಈ) ಇದ್ದಲ್ಲಿ, ಇದರ ಬಗ್ಗೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು? | |

**(ಐಟಿಬಿಟಿ 33 ಎಲ್‌ಸಿಎಂ 2020)**

**(ಡಾ. ಅಶ್ವಥ್ ನಾರಾಯಣ ಸಿ.ಎನ್)**
ಉಪಮುಖ್ಯಮಂತ್ರಿ ಹಾಗೂ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು